# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1000

ಸದಸ್ಯರ ಹೆಸರು : ಡಾ॥ ವೈ.ಎ ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 12.03.2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿಯವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಸೌರ ಶಕ್ತಿಯ ವಿದ್ಯುತ್ ಉತ್ಪಾದನೆಯ ಪ್ರಮಾಣ ಎಷ್ಟು? | ಪ್ರಸಕ್ತ 2019-20ನೇ ಸಾಲಿನಲ್ಲಿ, ಜನವರಿ ಅಂತ್ಯದವರೆಗೆ 6776.355 ದಶಲಕ್ಷ ಯೂನಿಟ್ ಗಳಷ್ಟು ವಿದ್ಯುತ್ತನ್ನು ಸೋಲಾರ್ ಮೂಲಕ ಪಡೆಯಲಾಗಿದೆ. |
| ಆ | ಸೌರ ವಿದ್ಯುತ್ ಉತ್ಪಾದಕರಿಗೆ ಸರ್ಕಾರ ನೀಡುತ್ತಿರುವ ಸವಲತ್ತುಗಳೇನು. | ಸೌರ ನೀತಿ 2014-21 ರನ್ವಯ ಪ್ರಕಾರ ಗ್ರಿಡ್ ಸಂಪರ್ಕಿತ ಹೆಚ್ಚಿನ (ಮೆ.ವ್ಯಾ) ಸಾಮರ್ಥ್ಯದ ಯೋಜನೆಗಳಿಗೆ ಲಭ್ಯವಿರುವ ಪ್ರೋತ್ಸಾಹಕ ಕ್ರಮಗಳು ಈ ಕೆಳಕಂಡಂತಿವೆ:<br>• ಕರ್ನಾಟಕ ಕೈಗಾರಿಕಾ ನೀತಿಯಡಿಯಲ್ಲಿ ಸಿಗುವ ಎಲ್ಲಾ ವಿನಾಯಿತಿಗಳನ್ನು ಸೌರ ಯೋಜನೆ ಅಭಿವೃದ್ಧಿದಾರರು ಪಡೆಯಲು ಅವಕಾಶವಿದೆ.<br>• ಸೌರ ಯೋಜನೆಗಳಿಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ/ವಿದ್ಯುತ್ ಸರಬರಾಜು ಕಂಪನಿಗಳಿಗೆ ಪಾವತಿಸಬೇಕಾಗಿದ್ದ ಮೇಲ್ವಿಚಾರಣಾ ಶುಲ್ಕವನ್ನು 5% ಗೆ ಇಳಿಸಲಾಗಿದೆ.<br>• ಸೌರ ಯೋಜನೆಗಳನ್ನು ಅನುಷ್ಠಾನಗೊಳಿಸಲು ಭೂ ಸುಧಾರಣೆ ಕಾಯ್ದೆಯನ್ವಯ ಪರಿಭಾವಿತ ಭೂ ಪರಿವರ್ತನೆ ಸೌಲಭ್ಯವನ್ನು ಒದಗಿಸಲಾಗಿದ್ದು, ಜಮೀನಿನ ಭೂ ಪರಿವರ್ತನೆಗೆ ಸಂಬಂಧಪಟ್ಟ ಶುಲ್ಕಗಳನ್ನು ಪಾವತಿಸಿದಲ್ಲಿ ಯೋಜನಾ ಅನುಷ್ಠಾನ ಕಾರ್ಯವನ್ನು ಕೈಗೆತ್ತಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.<br>• ಸೌರ ಯೋಜನೆಗಳ ಅನುಷ್ಠಾನಕ್ಕೆ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿ ಪಡೆಯುವುದರಿಂದ ವಿನಾಯಿತಿ ನೀಡಲಾಗಿದೆ.<br>ಕೇಂದ್ರ ಸರ್ಕಾರದಿಂದ ಗ್ರಿಡ್ ಸಂಪರ್ಕಿತ ಸೌರ |

| | | |
|---|---|---|
| | | ಯೋಜನೆಗಳಿಗೆ Customs ಸುಂಕ ವಿನಾಯಿತಿಯನ್ನು ನಿಯಮಗಳ ಪ್ರಕಾರ ಒದಗಿಸಲಾಗುವುದು.<br>**<u>ಸೌರ ಮೇಲ್ಛಾವಣಿ:</u>**<br>➢ ಸೌರ ಮೇಲ್ಛಾವಣಿ ಘಟಕ ಅಳವಡಿಸಿ ಸೋಲಾರ್ ವಿದ್ಯುತ್ ಉತ್ಪಾದನೆಯನ್ನು ಪ್ರೋತ್ಸಾಹಿಸಲು ವಿದ್ಯುತ್ ಸರಬರಾಜು ಕಂಪನಿಗಳು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತವೆ.<br>○ ಸೌರ ಶಕ್ತಿ ಮೇಲ್ಛಾವಣಿ ಪಿವಿ ವ್ಯವಸ್ಥೆಗೆ ಸಂಬಂಧಿಸಿದ ಗ್ರಾಹಕರ/ಅಧಿಕಾರಿಗಳ ಕೈಪಿಡಿ, ಸರ್ಕಾರದ ಅಧಿಕೃತ ಜ್ಞಾಪನಾ ಪತ್ರಗಳು ಹಾಗೂ ಸುತ್ತೋಲೆಗಳನ್ನು ವಿ.ಸ.ಕಂ.ಗಳ ಅಂತರ್ಜಾಲದಲ್ಲಿ ಹಾಗೂ ಆನ್ ಲೈನ್ ಮೂಲಕವೇ ಅರ್ಜಿಗಳು ಹಾಗೂ ನೋಂದಣಿ ಶುಲ್ಕ ಪಾವತಿಸಲು ಸಾಫ್ಟ್ ವೇರ್ ಸಿದ್ಧಪಡಿಲಾಗಿರುತ್ತದೆ.<br>○ ವಾರ್ತಾ ಪತ್ರಿಕೆ, ನಿಯತ ಕಾಲಿಕೆಗಳು, ಸ್ಮರಣ ಸಂಚಿಕೆ ಇತ್ಯಾದಿಗಳಲ್ಲಿ ಜಾಹೀರಾತು ನೀಡುವುದು.<br>○ ಫಲಕಗಳು ಮತ್ತು ಬಸ್ ತಂಗುದಾಣಗಳ ಮೇಲೆ ಜಾಹೀರಾತನ್ನು ನೀಡುವುದರ ಮುಖಾಂತರ ದೂರದರ್ಶನ, ಆಕಾಶವಾಣಿ, ಬಿಗ್ ಎಫ್.ಎಂ.ಗಳಲ್ಲಿ ಆವರ್ತನಗಳು.<br>○ ಭಿತ್ತಿ ಪತ್ರಗಳು, ಕರಪತ್ರಗಳು, ಕೈಪಿಡಿಗಳ ಮೂಲಕ ಜಾಹೀರಾತನ್ನು ನೀಡುವುದರ ಮುಖಾಂತರ.<br>➢ ಸೌರ ಶಕ್ತಿ ಘಟಕದ ಸಾಮರ್ಥ್ಯವನ್ನು ವಿದ್ಯುತ್ ಮಂಜೂರಾತಿ (Sanctioned Load) ಹೊರೆಯ ಸಾಮರ್ಥ್ಯದ ಮಿತಿ ಮೀರದೆ, ಗರಿಷ್ಟ 2 ಮೆ.ವ್ಯಾ. ಸಾಮರ್ಥ್ಯದವರೆಗೆ ಸೌರ ಮೇಲ್ಛಾವಣಿ ಘಟಕಗಳನ್ನು ಅನುಷ್ಠಾನಗೊಳಿಸಬಹುದಾಗಿದೆ.<br>➢ ಗೃಹಬಳಕೆ, ಹಾಸ್ಪಿಟಲ್ಸ್ ಮತ್ತು ಶೈಕ್ಷಣಿಕ ಸಂಸ್ಥೆಗಳಿಗೆ Gross metering ಅಥವಾ Net metering ಆಯ್ಕೆ ಮಾಡಿಕೊಳ್ಳುವ ಅವಕಾಶವಿದ್ದು, ಇತರೆ ಉಳಿದ ಸ್ಥಾವರಗಳಿಗೆ Net metering ಮಾತ್ರ ಅಳವಡಿಸಿಕೊಳ್ಳುವ ಅವಕಾಶವಿರುತ್ತದೆ.<br>➢ ಕಟ್ಟಡದ ಮೇಲ್ಛಾವಣಿ ಮೇಲೆ ಸೌರಶಕ್ತಿ ಉತ್ಪಾದನಾ ಘಟಕ ಅಳವಡಿಸಲು ರಾಜ್ಯ ಸರ್ಕಾರದಿಂದ ಯಾವುದೇ ಸಹಾಯಧನ ಇರುವುದಿಲ್ಲ. ಆದರೆ ಕೇಂದ್ರ ಸರ್ಕಾರದಿಂದ |

| | | |
|---|---|---|
| | | ಆಯವ್ಯಯಕ್ಕನುಸಾರವಾಗಿ ಸಹಾಯಧನವನ್ನು ನೀಡಲಾಗುತ್ತದೆ. ಇದಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ನೋಡಲ್ ಏಜೆನ್ಸಿಯಾಗಿರುತ್ತದೆ.<br>➢ ಸೌರ ಘಟಕಗಳಿಂದ ಉತ್ಪಾದನೆಯಾದ ವಿದ್ಯುತ್ ನ್ನು ಕೆ.ಇ.ಆರ್.ಸಿ ರವರ ಮಾನದಂಡಗಳು, ನಿಯಮಾವಳಿಗಳು ಹಾಗೂ ನಿಗಧಿಪಡಿಸಿರುವ ದರದಂತೆ ವಿದ್ಯುತ್ ವಿತರಣಾ ಕಂಪನಿಗಳಿಂದ ಖರೀದಿಸಲಾಗುತ್ತಿದೆ. |
| ಇ | ಮೇಲ್ಕಂಡ ಉತ್ಪಾದಕರು ಸಂಕಷ್ಟದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ | ಬಂದಿದ್ದಲ್ಲಿ, ಸರ್ಕಾರ ಅವರ ನೆರವಿಗೆ ಕೈಗೊಂಡಿರುವ ಕ್ರಮಗಳೇನು? | ಅನ್ವಯಿಸುವುದಿಲ್ಲ. |

ಸಂಖ್ಯೆ: ಎನರ್ಜಿ 46 ಇಬಿಎಸ್ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿಗಳು